# ವೇದ ಗ್ರಂಥಗಳಲ್ಲಿ ಪ್ರವಾದಿ ಮುಹಮ್ಮದ್(ಸ)

ಪ್ರೊ ಕಮಾಲ್ ಪಾಶಾ, ಎಂ.ಎ.

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮಾನವನ ಹೊರತು ಇತರೆಲ್ಲಾ ಜೀವಿಗಳು ಹುಟ್ಟುಗುಣದಂತೆ ಜೀವಿಸುತ್ತವೆ. ಅವು ಹೇಗೆ ಜೀವಿಸಬೇಕೆಂದು ಮೊದಲೇ ನಿರ್ಧರಿಸಲ್ಪಟ್ಟಿದೆ. ಅವುಗಳಿಗೆ ನೈಸರ್ಗಿಕವಾಗಿ ನಿರ್ದಿಷ್ಟಗೊಂಡ ಜೀವನ ವಿಧಾನವಿದೆ. ಅದನ್ನು ತೊರೆದು ಬೇರೊಂದು ಜೀವನ ರೀತಿಯನ್ನು ಕಂಡು ಹಿಡಿಯಲು ಅಥವಾ ಅಂಗೀಕರಿಸಲು ಅವುಗಳಿಗೆ ಸಾಧ್ಯವಿಲ್ಲ. ಮಾನವರ ಸ್ಥಿತಿ ಹಾಗಲ್ಲ, ಆತನು ತನ್ನ ಜೀವನ ರೀತಿಯನ್ನು ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿಯೇ ಆಯ್ಕೆ ಮಾಡಬೇಕಾಗುತ್ತದೆ. ಆದ್ದರಿಂದ ಮಾನವನಿಗೆ ಜೀವನದಲ್ಲಿ ಮಾರ್ಗದರ್ಶನದ ಅಗತ್ಯ ಬಹಳವಿದೆ. ಆತ ವಿಚಾರವಂತನಾಗಿದ್ದಾನೆ. ಪ್ರತಿಯೊಂದು ಕೆಲಸವನ್ನು ಮಾಡುವಾಗಲೂ ಅವುಗಳ ತಪ್ಪೊಪ್ಪುಗಳ ಬಗ್ಗೆ ಆತ ವಿಚಾರ ಮಾಡುತ್ತಾನೆ. ಹಾಗೆಯೇ ಈ ಜೀವನಕ್ಕೆ ಏನಾದರೂ ಅರ್ಥ ವಿದೆಯೇ, ಮರಣದ ಬಳಿಕ ಜೀವನವಿದೆಯೇ, ಮರಣದೊಂದಿಗೆ ಎಲ್ಲವೂ ಕೊನೆಗೊಳ್ಳುವುದೇ ಎಂದು ಮುಂತಾದ ಪ್ರಶ್ನೆಗಳು ಆತನನ್ನು ಕಾಡುತ್ತವೆ. ಅವುಗಳ ಉತ್ತರವನ್ನು ಸಂಶೋಧನೆ – ಅನ್ವೇಷಣೆಗಳಿಂದಲೂ ತಿಳಿಯಲು ಸಾಧ್ಯವಾಗುವುದಿಲ್ಲ. ಪ್ರಪಂಚವನ್ನು ಸೃಷ್ಟಿಸಿ ಸಂಯೋಜನೆಗೊಳಿಸಿರುವ ದೇವನು ಮಾನವಕುಲಕ್ಕೆ ಅಗತ್ಯವಿರುವ ಸಕಲ ವಸ್ತುಗಳನ್ನೂ ಸಜ್ಜುಗೊಳಿಸಿದ್ದಾನೆ. ಅಂತಹ ದೇವನು ಮಾನವನ ಅತಿ ಪ್ರಧಾನವಾದ ಈ ಬೇಡಿಕೆಯನ್ನು ಅರ್ಥಾತ್ ಜೀವನ ಮಾರ್ಗದರ್ಶನವನ್ನು ನಿರ್ಲಕ್ಷಿಸಿಲ್ಲ. ಆದ್ದರಿಂದಲೇ ಪ್ರಥಮ ಮಾನವ ಹಾಗೂ ಮಾನವಕುಲದ ಆದಿಪಿತ ಆದಮರೇ ಓರ್ವ ಪ್ರವಾದಿಯಾದರು. ತರುವಾಯ ಧರ್ಮವು

ಕ್ಷೀಣಿಸಿ ಅಧರ್ಮವು ವೃದ್ಧಿಸಿದಾಗಲೆಲ್ಲಾ ಮಾನವರ ಮಾರ್ಗದರ್ಶನಕ್ಕಾಗಿ ಪ್ರವಾದಿಗಳು ಆಗತರಾದರೆಂದು ನಾವು ಚರಿತ್ರೆಯಲ್ಲಿ ಕಾಣುತ್ತೇವೆ. "ಓರ್ವ ಪ್ರವಾದಿಯು ಆಗಮಿಸದ ಯಾವ ಸಮುದಾಯವೂ ಈ ಹಿಂದೆ ಗತಿಸಿ ಹೋಗಿಲ್ಲ" ಎಂದು ಕುರ್‌ಆನ್ ಹೇಳುತ್ತದೆ.

ಬಾಬಿಲೋನಿಯಾದಲ್ಲಿ ದೊರೆತ ಪ್ರಾಚೀನ ಶಿಲಾಫಲಕವೊಂದರಲ್ಲಿ ಹಮ್ಮುರಾಬಿಯು ದೇವನಿಂದ ನೀತಿಸಂಹಿತೆಯನ್ನು ಪಡೆಯುವ ದೃಶ್ಯವು ಕೆತ್ತಲ್ಪಟ್ಟಿದೆ. ಭಾರತೀಯ ವೇದಗ್ರಂಥಗಳು ದೇವನಿಂದ ಅವತೀರ್ಣಗೊಂಡುವೆಂದು ನಂಬಲಾಗುತ್ತದೆ. (K.M. Panikkar, a Survey of Indian History, Asia Publishing House P. 6) ವೇದಗಳಿಗೆ 'ಅಪುರುಷ್ಯ' (ಮಾನವ ನಿರ್ಮಿತವಲ್ಲದ್ದು) 'ನಿತ್ಯ' (ಶಾಶ್ವತವಾದುದು) 'ಶ್ರುತಿ' (ದೇವನಿಂದ ಆಲಿಸಿದ್ದು) ಮುಂತಾದ ಸಂಸ್ಕೃತ ಹೆಸರುಗಳಿರುವುದು ಗಮನಾರ್ಹ. ಶ್ರೀ ಬುದ್ಧನ ಹೆಸರೇ 'ಬೋಧನೆ ದೊರೆತವ' ಎಂಬುದನ್ನು ಸೂಚಿಸುತ್ತದಷ್ಟೆ. ಹೀಗೆ ಲೋಕದ ನಾನಾ ಭಾಗಗಳಲ್ಲಿ ವಿವಿಧ ಕಾಲಗಳಲ್ಲಿ ಅದೆಷ್ಟೋ ಪ್ರವಾದಿಗಳು ಬಂದರು. ಮೋಸೆಸ್ (ಮೂಸಾ), ಜೀಸಸ್ (ಈಸಾ) ಮತ್ತು ಮುಹಮ್ಮದ್(ಸ) ಆಗಮಿಸಿದರು. ಹಳೆಯ ದೈವಿಕ ಮಾರ್ಗದರ್ಶನಗಳು ಪುರೋಹಿತರ ತಿದ್ದುಪಡಿ ಅಥವಾ ಸೇರ್ಪಡೆಗಳಿಗೆ ಗುರಿಯಾದ ಸಂದರ್ಭಗಳಲ್ಲೇ ಹೆಚ್ಚಾಗಿ ಹೊಸ ಪ್ರವಾದಿಗಳ ಆಗಮನವಾಗಿದೆ. ಮುಂದೆ ಆಗಮಿಸಲಿರುವ ಪ್ರವಾದಿಗಳ ಕುರಿತು ಮುನ್ಸೂಚನೆ ನೀಡುವುದು ಪೂರ್ವ ವೇದಗಳ ಸಂಪ್ರದಾಯವಾಗಿತ್ತು. ಇದರಿಂದಾಗಿ ಅನಂತರದ ಕಾಲಗಳಲ್ಲಿ ಹುಟ್ಟುವ ಪ್ರವಾದಿಗಳನ್ನು ಗುರುತಿಸಲು ಸತ್ಯಾನ್ವೇಷಿಗಳಿಗೆ ಸುಲಭವಾಗುತ್ತಿತ್ತು. ಹೀಗೆ ಅಂತ್ಯ ಪ್ರವಾದಿ ಮುಹಮ್ಮದ್(ಸ)ರವರ ಆಗಮನದ ಕುರಿತು ಲೋಕದ ವಿವಿಧ ಭಾಗಗಳಲ್ಲಿರುವ ಹಳೆಯ ವೇದ ಗ್ರಂಥಗಳಲ್ಲಿ ಭವಿಷ್ಯ ನುಡಿಯಲಾಗಿದೆ. ಅದರ ಕೆಲವು ಉದಾಹರಣೆಗಳನ್ನು ಸತ್ಯಾಕಾಂಕ್ಷಿಗಳ ಹಾಗೂ ವಿಚಾರಶೀಲರ ಮುಂದಿಡುತ್ತಿದ್ದೇವೆ.

ಶಾಂತಿ ಪ್ರಕಾಶನ

# ಪೂರ್ವ ವೇದಗಳ ಭವಿಷ್ಯವಾಣಿ

## ಭವಿಷ್ಯ ಪುರಾಣ

ಭವಿಷ್ಯ ಪುರಾಣದಲ್ಲಿ ವ್ಯಾಸಮುನಿ ಹೇಳುತ್ತಾರೆ:

"ಏತಸ್ಮಿನ್ನಂತರೇ ಮ್ಲೇಚ್ಛ ಆಚಾರ್ಯೇಣ ಸಮನ್ವಿತಃ
ಮಹಾಮದ ಇತಿಖ್ಯಾತಃ ಶಿಷ್ಯಶಾಖಾ ಸಮನ್ವಿತಂ"

(ಭವಿಷ್ಯ ಪುರಾಣ, ಪ್ರತಿಸರ್ಗ ಪರ್ವ III 3, 5-8)

"ಆ ವೇಳೆಯಲ್ಲಿ ಮಹಾಮದ್(ಮುಹಮ್ಮದ್) ಎಂಬ ಹೆಸರಿನ ಓರ್ವ ಪರಕೀಯನು ತನ್ನ ಅನುಚರರೊಂದಿಗೆ ಪ್ರತ್ಯಕ್ಷನಾಗುವನು." ತರುವಾಯ ಓರ್ವ ಭಾರತೀಯ ರಾಜನು ಆತನನ್ನು ಈ ರೀತಿ ಅಭಿಸಂಬೋಧಿಸುವನೆಂದು ಹೇಳಲಾಗಿದೆ:

"(ಭೋಜರಾಜ ಉವಾಚ) ನಮಸ್ತೆ ಗಿರಿಜಾ ನಾಥಾ ಮರುಸ್ಥಳ ನಿವಾಸಿನೆ
ತ್ರಿಪುರಾಸುರನಾಶಯ- ಬಹುಮಾಯಾ ಪ್ರವರ್ತಿನೆ
ಮ್ಲೇಚ್ಛೈರ್ಗುಪ್ತಾಯ ಶುದ್ಧಾಯ ಸಚ್ಚಿದಾನಂದ ರೂಪಿಣೆ
ತ್ವಾಮಾಂಹಿ ಕಿಂಕರಂ ವಿದ್ಧಿಶರಣಾರ್ಥಮ ಪಾಗತಂ"

(ಭವಿಷ್ಯ ಪುರಾಣ ಪ್ರತಿಸರ್ಗಪರ್ವ)

"ಎಲೈ ಮಾನವಕುಲದ ಅಭಿಮಾನವೆ! ಮರುಭೂಮಿ ನಿವಾಸಿ, ನಾನು ನಿನ್ನನ್ನು ವಂದಿಸುತ್ತೇನೆ. ಪಿಶಾಚಿಯನ್ನು ನಾಶಗೊಳಿಸಲು ನೀನು, ಪ್ರಬಲ ಶಕ್ತಿಗಳಿಸಿರುವೆ. ದುಷ್ಟ ಶತ್ರುಗಳಿಂದ ನೀನು ಸುರಕ್ಷಿತನಾಗಿರುವಿ. ಎಲೈ ಸಚ್ಚಿದಾನಂದ ಸ್ವರೂಪವೇ, ನಾನು ನಿನ್ನ ವಿನೀತ ದಾಸನು. ನಿನ್ನ ಪಾದ ಕಮಲಗಳಲ್ಲಿ ಬಿದ್ದಿರುವ ನನ್ನನ್ನು ಸ್ವೀಕರಿಸಿ ಅನುಗ್ರಹಿಸು."

ಈ ಭವಿಷ್ಯವಾಣಿಯ ಕೆಲವು ವಿಷಯಗಳು ಗಮನಾರ್ಹವಾಗಿದೆ. ಬರಲಿರುವ ಪ್ರವಾದಿಯ ಹೆಸರು 'ಮುಹಮ್ಮದ್' ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆತನು ಮರುಭೂಮಿ ನಿವಾಸಿ ಅಥವಾ ಅರಬ್ ನಿವಾಸಿಯೆಂದು ಹೇಳಿದೆ. ಆ ಪ್ರವಾದಿಯ ಸಂಗಾತಿಗಳ ಕುರಿತೂ ಪ್ರಸ್ತಾಪಿಸಿದೆ. ಅರೇಬಿಯಾದಲ್ಲಿ ಹುಟ್ಟಿದ ಪ್ರವಾದಿ ಮುಹಮ್ಮದ್‌ರಿಗೆ ಅಬೂಬಕರ್, ಉಮರ್, ಉಸ್ಮಾನ್, ಅಲೀ ಮುಂತಾದ ಸಂಗಾತಿಗಳಿದ್ದಂತೆ ಇತರ ಪ್ರವಾದಿಗಳಿಗಿದ್ದರೇ ಎಂಬುದು ತಿಳಿದಿಲ್ಲ. ಬರಲಿರುವ ಪ್ರವಾದಿಯು ಎಲ್ಲಾ ಶತ್ರುಗಳಿಂದಲೂ ಸುರಕ್ಷಿತನೆಂದು ಹೇಳಿದೆ. ಇದು ಪ್ರವಾದಿ ಮುಹಮ್ಮದ್‌ರ(ಸ) ಮಟ್ಟಿಗೆ ಸಮಂಜಸವೆನಿಸುತ್ತದೆ. ವ್ಯಾಸಮುನಿ ಭವಿಷ್ಯ ನುಡಿಯುವುದರೊಂದಿಗೆ, ಆ ಪ್ರವಾದಿಯನ್ನು ಗೌರವಿಸಿ, ಆತನನ್ನು ಸ್ವೀಕರಿಸಲು ವಿನಂತಿಸಿರುವುದು ಗಮನಾರ್ಹ.

ವ್ಯಾಸಮುನಿಯು ಬರಲಿರುವ ಪ್ರವಾದಿಗಳ ಅನುಯಾಯಿಗಳ ಗುಣ ವೈಶಿಷ್ಟ್ಯ ಮತ್ತು ಸಂಸ್ಕೃತಿಯ ಲಕ್ಷಣಗಳನ್ನೂ ಸೂಚಿಸಿದ್ದಾನೆ:

"ಲಿಂಗಛೇಡಿ ಶಿಖಾ ಹೀನಃ
ಶ್ಮಶ್ರುಧಾರಿ ಸದುಷಕ
ಉಚ್ಚಾಲಪೀಸರ್ವ ಭಕ್ಷಿ
ಭವಿಷ್ಯತಿಜನಮೋಂ
ವಿನ ಕೌಶಲಂ ಚವಶವಸ್ತೊ
ಷಾಂ ಭಕ್ಷ್ಯಯಾ ಮತಾಮಾಂ
ಮುಸಲೈನೈವ ಸಂಸ್ಕಾರಃ
ಕುಶೈರಿ ಭವ ವಿಷ್ಯತಿ
ತಸ್ಮಾನ್ಮುಸಲವಂತೋಹಿ
ಜಾತಯೋ ಧರ್ಮದೂಷಕಃ
ಇತಿ ಪೈಶಾಚ ಧರ್ಮಶ್ಚ
ಭವಿಷ್ಯತಿ ಮಾಯಾಕೃತಃ" (ಭವಿಷ್ಯ ಪುರಾಣ ಪ್ರತಿಸರ್ಗ ಪರ್ವ III 25-28)

"ಆತನ ಅನುಯಾಯಿಗಳು ವೃತ್ತಛೇದನ ಕರ್ಮ(ಸುನ್ನತ್) ನಿರ್ವಹಿಸುವರು. ಅವರು ಶಿಖೆ ಧರಿಸುವುದಿಲ್ಲ. ಅವರು ಗಡ್ಡ ಬೆಳೆಸುವರು. ಅವರು ಕ್ರಾಂತಿಕಾರಿ

ಗಳಾಗುವರು. ಪ್ರಾರ್ಥನೆಗೆ ಬರಲು ಅವರು ಉಚ್ಚಸ್ವರದಿಂದ ಆಹ್ವಾನಿಸುವರು. ಹಂದಿಯ ವಿನಾ ಹೆಚ್ಚಿನ ಎಲ್ಲಾ ಪ್ರಾಣಿಗಳನ್ನು ಅವರು ತಿನ್ನುವರು. ಶುದ್ಧಿಗಾಗಿ 'ದರ್ಭೆ' ಉಪಯೋಗಿಸುವ ಬದಲಾಗಿ ಅವರು ಹೋರಾಡಿ ಪರಿಶುದ್ಧರಾಗುವರು. ಅವರು ಧರ್ಮವನ್ನು ಮಲಿನಗೊಳಿಸುವವರ ವಿರುದ್ಧ ಹೋರಾಡುವುದರಿಂದ ಅವರು 'ಮುಸ್ಲಿಮ್' ಅಥವಾ 'ಮುಸಲೆ' ಎಂಬ ಹೆಸರಿನಿಂದ ಖ್ಯಾತರಾಗುವರು. ಈ ಮಾಂಸಾಹಾರಿಗಳ ಧರ್ಮವು ನನ್ನಿಂದ ಆರಂಭವಾಗುವುದು." ಈ ವಿಷಯ ಗಳೆಲ್ಲವೂ ಪ್ರವಾದಿ ಮುಹಮ್ಮದ್‌ರ(ಸ) ಅನುಯಾಯಿಗಳಿಗೆ ಅನ್ವಯಿಸುತ್ತದೆ.

## ಅಥರ್ವವೇದ

ಅಥರ್ವವೇದದ ಕುಂಡಪ ಸೂಕ್ತದಲ್ಲಿ ಹೀಗೆ ಹೇಳಿದೆ:

**"ಇದಂ ಜನಾ ಉಪಶುತ**
**ನರಾಸಂ ಸಸ್ತವಿಷ್ಯತೆ-**
**ಷಷ್ಟಿಂ ಸಹಸ್ರಾನವತಿಂ**
**ಚಕೌರವ ಅರೂಶಮೋಘದಹ್ಮಹೇ**
**ಉಷ್ಟ್ರಾಯಸ್ಯಂ ಪ್ರವಾಹಿಣೋ**
**ವಧೂ ಮಂತೋಹಿರ್ದ್ದಶ**
**ವತ್ಮಾರಥಸ್ಯನಿ**
**ಜಿಹಿಷತೇ ದಿವ**
**ಈಷಮಾಣ ಉಪಸ್ಪೃತಃ**
**ಏವಂತ್‌ಷಯೆ ಮಾಮಹೆ**
**ಶತಂ ನಿಷ್ಕಾಂದ ಶಪ್ರಜಃ**
**ತ್ರೀಣಿ ಶತಾನ್ಯವತಾಂ**
**ಸಹಸ್ರಾದಶ ಗೋನಾಂ"** **(ಅಥರ್ವವೇದ, ಕಾಂಡ, 20-127: 70-1-3)**

"ಓ ಜನರೇ! ನೀವು ಗಂಭೀರವಾಗಿ ಆಲಿಸಿರಿ. ಸ್ತುತ್ಯರ್ಹನು ಹೊಗಳಲ್ಪಡುವನು. 60,000 ಶತ್ರುಗಳ ಮಧ್ಯದಿಂದ ನಾವು ಆತನನ್ನು ಸ್ವಾಗತಿಸುವೆವು. ಆತನ ವಾಹನವು 20 ಗಂಡು ಮತ್ತು ಹೆಣ್ಣೊಂಟೆಗಳಾಗಿರುವುದು. ಆತನ ಸ್ಥಾನ ಮಹಿಮೆಯು

ಸ್ವರ್ಗಲೋಕದ ವರೆಗೆ ತಲುಪಿ ಅದನ್ನು ಇಳಿಸುವುದು. ಆತನು ಮಾಮ ಋಷಿಗೆ 100 ಸ್ವರ್ಣನಾಣ್ಯ, 10 ಚತುರಗಳು, 300 ಅರಬೀ ಕುದುರೆಗಳು ಮತ್ತು 10,000 ದನಗಳನ್ನು ನೀಡುವನು." ಇಲ್ಲಿ ಕೆಲವು ಮಾತುಗಳು ವಿಶೇಷ ಗಮನಾರ್ಹವಾಗಿದೆ. ಮುಹಮ್ಮದ್ ಎಂಬ ಪದಕ್ಕೆ ಹೊಗಳಲ್ಪಡುವವನೆಂಬ ಅರ್ಥವಿದೆ. ಈ ಸೂಕ್ತಕ್ಕೆ ಕುಂಡಪ ಸೂಕ್ತವೆಂದು ಹೆಸರು. ಕುಂಡಪವೆಂದರೆ ಉದರದ ಗ್ರಂಥಿ ಎಂದರ್ಥ. ರಹಸ್ಯಕ್ಕೆ ಸಂಬಂಧಿಸಿದ ಎಂದೂ ಅರ್ಥೈಸಬಹುದು. ಪ್ರವಾದಿ ಮುಹಮ್ಮದ್‌ರ ಹುಟ್ಟೂರಾದ ಮಕ್ಕಾಕ್ಕೆ ಉದರವೆಂಬ ಅರ್ಥವೂ ಇದೆ. 'ಅಸ್ತವಿಷ್ಯತೆ' ಎಂಬ ಪ್ರಯೋಗವು ಭವಿಷ್ಯತ್‌ಕಾಲ ಸೂಚಕವಾಗಿದೆ. ಈ ಸೂಕ್ತದಲ್ಲಿರುವ 'ಕೌರ' ಎಂಬ ಪದಕ್ಕೆ 'ಪಲಾಯನ' ಎಂಬ ಅರ್ಥವಿದೆ. ಇಸ್ಲಾಮ್ ಎಂದರೆ 'ಶಾಂತಿ'ಯೆಂದರ್ಥ ವಲ್ಲವೇ? ಅದೇ ರೀತಿ ಮುಸ್ಲಿಮರ ಹಿಜರಿ ವರುಷವು ಪ್ರವಾದಿ ಮುಹಮ್ಮದ್‌ರ ವಲಸೆಯಿಂದ ಆರಂಭಗೊಂಡಿದೆ. ಇಲ್ಲಿ ಒಂಟೆಯ ಮೇಲೆ ಸಂಚಾರ ಮಾಡುವ ಓರ್ವ ಸನ್ಯಾಸಿಯ ಕುರಿತು ಪ್ರಸ್ತಾಪಿಸಲಾಗಿದೆ. ಇದು ಹೆಚ್ಚಿನಂಶ ಪ್ರವಾದಿ ಮುಹಮ್ಮದ್‌ರನ್ನೇ ಸೂಚಿಸುತ್ತದೆ. ಏಕೆಂದರೆ ಬ್ರಾಹ್ಮಣನು ಒಂಟೆಯ ಮೇಲೆ ಪ್ರಯಾಣಿಸಿದರೆ ಅಶುದ್ಧನಾಗುವನೆಂದು ಹೇಳಿದೆ.

**ಉಷ್ಟ್ರಯಾನಂ ಸಮಾರುಹ್ಯ ಖರಯಾನಂ ತು ಕಾಮತಃ!**

**ಸ್ನಾತ್ವಾ ತು ವಿಪ್ರೋ ದಿಗ್ವಾಸಾಃ ಪ್ರಾಣಾಯಾಮೇನ ಶುದ್ಧ್ಯತಿ!**

"ಬೇಕೆಂತಲೇ ಬಯಸಿ ಒಂಟೆಯನ್ನು ಹೂಡಿದ ಬಂಡಿಯನ್ನೇರಿ ಅಥವಾ ಕತ್ತೆಯನ್ನು ಹೂಡಿದ ಬಂಡಿಯನ್ನೇರಿ ಪ್ರಯಾಣಿಸಿದರೆ ಬ್ರಾಹ್ಮಣನು ಬತ್ತಲೆಯಾಗಿ, ಸ್ನಾನಮಾಡಿ, ಪ್ರಾಣಾಯಾಮಗಳನ್ನು ಮಾಡಿ ಶುದ್ಧನಾಗಬೇಕು."

**(ಮನುಸ್ಮೃತಿ XI: 201)**

ಈ ಪರಾಮರ್ಶೆಯು ಓರ್ವ ಭಾರತೀಯ ಋಷಿಗೆ ಸಂಬಂಧಿಸಿದ್ದಾಗಿರದೆ, ಅರೇಬಿಯಾದ ನಿವಾಸಿ ಪ್ರವಾದಿ ಮುಹಮ್ಮದ್‌ರ(ಸ) ಕುರಿತೇ ಆಗಿರಬಹುದೆಂದು ಮನುಸ್ಮೃತಿಯಿಂದ ಊಹಿಸಬಹುದು. 'ವಧುಮಂತೋ ಹಿರ್ದಶ' ಎಂಬ ಪ್ರಸ್ತಾಪವು ಬರಲಿರುವ ಋಷಿಗೆ ಬಹುಪತ್ನಿಯರಿರುವುದನ್ನು ಸೂಚಿಸುತ್ತದೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಹಾಗಿದ್ದರೂ, ಮುಹಮ್ಮದ್‌ರ(ಸ) ಮಟ್ಟಿಗೆ ಅದು ಸರಿಯೆನಿಸುತ್ತದೆ. ಈ ಸೂಕ್ತದಲ್ಲಿ ತಿಳಿಸಲಾಗಿರುವಂತಹ ಓರ್ವ 'ಮಾಮ' ಋಷಿಯು ಭಾರತೀಯ ಚರಿತ್ರೆಯಲ್ಲಿ ಕಂಡು ಬರುವುದಿಲ್ಲ. ಪ್ರವಾದಿ ಮುಹಮ್ಮದ್‌ರ(ಸ) ಹೊರತು

ಇನ್ನಾರಿಗೂ ಈ ಹೆಸರಿನೊಂದಿಗೆ ಸಾಮ್ಯತೆಯಿಲ್ಲವೆಂಬುದೂ ಗಮನಾರ್ಹ. ಪ್ರವಾದಿ ಮುಹಮ್ಮದ್‌ರ(ಸ) ಪ್ರಸ್ತಾಪವೆಂದು ನಂಬಬಹುದಾದ ಇನ್ನೂ ಅನೇಕ ಸೂಕ್ತಗಳು ಅಥರ್ವ ವೇದದಲ್ಲಿದೆ. ಆದರೆ ಸ್ಥಳಾಭಾವದಿಂದ ಅದನ್ನು ಇಲ್ಲಿ ಪ್ರಸ್ತಾಪಿಸಲಾಗಿಲ್ಲ.

## ಸಾಮವೇದ

ಸಾಮವೇದದಲ್ಲಿ II 6, 8ರಲ್ಲಿ 'ಅಹ್ಮದ್' ತನ್ನ ತಂದೆಯಿಂದ ಧರ್ಮ ನೀತಿಗಳನ್ನು ಪಡೆದನು. ಅದರಲ್ಲಿ ಸಂಪೂರ್ಣ ಯುಕ್ತಿಯಿದೆ. ನಾನು ಆತನಿಂದ ಸೂರ್ಯನಿಂದೆಂಬಂತೆ ಪ್ರಕಾಶವನ್ನು ಸ್ವೀಕರಿಸುತ್ತೇನೆಂದು ಹೇಳಿದೆ. ಇಲ್ಲಿ ಪ್ರವಾದಿ ಮುಹಮ್ಮದ್‌ರ(ಸ) 'ಅಹ್ಮದ್' ಎಂಬ ಇನ್ನೊಂದು ಹೆಸರನ್ನು ಬಳಸಲಾಗಿದೆ. ಆತನಿಗೆ ಧರ್ಮ ನೀತಿಗಳು ದೊರೆಯಿತೆಂದು ಹೇಳಿದೆ. ಈ ಪ್ರಸ್ತಾಪವೂ ಪ್ರವಾದಿ ಮುಹಮ್ಮದ್‌ರಿಗೆ(ಸ) ಸಂಬಂಧಿಸಿರುವ ಸಾಧ್ಯತೆಯೇ ಹೆಚ್ಚು.

## ಉಪನಿಷತ್ತುಗಳು

ಹಿಂದೂ ಮತಗ್ರಂಥಗಳಲ್ಲಿ ಉಪನಿಷತ್ತುಗಳಿಗೆ ಹೆಚ್ಚು ಪ್ರಾಧಾನ್ಯತೆಯಿದೆ. ಉಪನಿಷತ್ತುಗಳಲ್ಲಿ ಅಲ್ಲೋಪನಿಷತ್ತು ಕುತೂಹಲದಾಯಕವಾಗಿದೆ. ಮುಸ್ಲಿಮರು ದೇವನನ್ನು 'ಅಲ್ಲಾ' ಎಂದು ಅಭಿಸಂಬೋಧಿಸುತ್ತಾರಷ್ಟೆ. ಅಲ್ಲೋಪನಿಷತ್ತಿನಲ್ಲಿ ಈ ರೀತಿ ಹೇಳಿದೆ:

"ಅದಲ್ಲೋಪ ನಿಷದಂ ವ್ಯಾಖ್ಯಾಸ್ಯಾಮಃ
ಅಸ್ಮಲ್ಲಾಂ ಇಲ್ಲೇ ಮಿತ್ರಾವರುಣಾದಿವ್ಯಾನಿಧತ್ತೆ
ಇಲ್ಲಲ್ಲೇ ವರುಣೋ ರಾಜ ಪುನರ್ಧದುಃ
ಹಯಾ ಮಿತ್ರೋ ಇಲ್ಲಂ ಇಲ್ಲಲ್ಲೆ ಇಲ್ಲಂ
ವರುಣೋ ಮತ್ರಸ್ತೇಜಸ್ಕಾಮಃ
ಹೋತಾರಮಿಂದ್ರೋ ಹೋತಾರ ಮಿಂದ್ರ
ಮಹಾ ಸುರೀಂದ್ರ
ಅಲ್ಲೋಜ್ಯೇಷ್ಠಂ ಪರಮಂ ಪೂರ್ಣಂ
ಬ್ರಹ್ಮಾಣಂ ಅಲ್ಲಾಂ
ಅಲ್ಲೋ ರಸೂಲ ಮಹಾಮದರ ಕಬಮಸ್ಕ

ಅಲ್ಲೋ ಅಲ್ಲಾಂ
ಆದಲ್ಲಾ ಭೂಗಮೇಕಂ
ಅಲ್ಲಾ ಬೂಕನಿವಾತಕಂ
ಅಲ್ಲೋ ಯಜ್ಞೇನ ಹುತಾಹೃತ್ವಾ
ಅಲ್ಲಾ ಸೂರ್ಯ ಚಂದ್ರ ಸರ್ವ ನಕ್ಷತಾಃ
ಅಲ್ಲಾ ಋಷೀಣಾಂ ಸರ್ವ ದಿವ್ಯಾಂ ಇಂದ್ರಾಯ ಪೂರ್ವಂ
ಮಾಯಾ ಪರಮಂತರೀಕ್ಷಾಃ
ಅಲ್ಲಾ ಪ್ರಥಿವ್ಯಾ ಅಂತರೀಕ್ಷಂ ವಿಶ್ವರೂಪಂ
ಇಲ್ಲಾಂ ಕಬರ ಇಲ್ಲಾಂ ಇಲ್ಲಲ್ಲೇತಿ ಇಲ್ಲಲ್ಲಾಂ
ಓಂ ಇಲ್ಲಾ ಇಲ್ಲಲ್ಲಾ ಅನಾದಿ ಸ್ವರೂಪಾಯ
ಅಥರ್ವಣಾಶ್ಯಾಮಾಹುಂ ಹ್ರೀಂ ಜನಾನ ಪಶುನ
ಸಿದ್ಧಾನ್ ಜಲಚಾರನ್ ಅದೃಷ್ಟಂ ಕುರು ಕುರ್‌ಫೂಟ್
ಸ್ವಸುರ ಸಂಹಾರಿಣೀ ಹುಂ ಹ್ರೀಂ ಅಲ್ಲೋ ರಸೂಲ
ಮಹಾಮದರ ಕಬರಸ್ಯ ಅಲ್ಲೋ ಅಲ್ಲಾ ಇಲ್ಲಲ್ಲಿ ತೀಇಲ್ಲಲ್ಲಾಃ"

(ಅಲ್ಲೋಪನಿಷತ್: 2-10)

ಈ ಸೂಕ್ತಗಳ ತಾತ್ಪರ್ಯವನ್ನು ಹೀಗೆ ಸಂಕ್ಷೇಪಿಸಬಹುದು: "ಅಲ್ಲೋಪನಿಷತ್ತನ್ನು ನಾವು ವ್ಯಾಖ್ಯಾನಿಸುತ್ತೇವೆ. ದೇವನಿಗೆ ಬೇರೆ ಮಿತ್ರರಿಲ್ಲ. ವರುಣನು ದಿವ್ಯ ನಿಧವನ್ನು ಗಳಿಸಿದುದರಿಂದ ದಿವ್ಯತ್ವ ದೊರೆಯಿತು. ಆತನೇ ವರಿಷ್ಠ ಮಿತ್ರನು. ಆತನ ವಿನಾ ಅನ್ಯ ದೇವರಿಲ್ಲ. ವರುಣ, ಹೋತ, ಇಂದ್ರ ಮುಂತಾದ ದೇವತೆಗಳು ಆತನ ಆಶ್ರಿತರು. ಅಲ್ಲಾ (ದೇವನು) ಆದಿಯು, ಆತನು ಸರ್ವ ಸಂಪೂರ್ಣನು. ಇಡೀ ಪ್ರಪಂಚವೇ ಆತನದ್ದು. ಶಿವನ ಪದವಿಯಲ್ಲಿ ವಿರಾಜಿಸುವ ಮಹಾಮದ್(ಮುಹಮ್ಮದ್) ಅಲ್ಲಾಹನ ರಸೂಲ(ದೂತ). ದೇವನೇ ದೇವನೇ (ಅಲ್ಲೋ ಅಲ್ಲಾಂ) ದೇವನು ಭೂಮಿಯಲ್ಲಿರುವುದರ ಸಂವಿಧಾಯಕನು. ದೇವನು ಆದಿಪರಿಪಾಲಕ ಮತ್ತು ಸೃಷ್ಟಿಕರ್ತ. ಯಾಗದಲ್ಲಿ ಹೋಮಿಸಲ್ಪಟ್ಟಿರುವುದನ್ನು (ಬಲಿ) ನೀನು ಸ್ವೀಕರಿಸು. ಇಂದ್ರನಿಗಿಂತ ಮುಂಚೆಯೇ ಸೂರ್ಯ ಚಂದ್ರ ನಕ್ಷತ್ರಾದಿಗೋಳಗಳೆಲ್ಲವನ್ನೂ ಋಷಿವರ್ಯರನ್ನೂ ಸೃಷ್ಟಿಸಿದಾತನೇ ದೇವನು. ಈ

ಪ್ರಪಂಚದ ವಾತಾವರಣವು ಮಾಯೆಯಾಗಿದೆ. ಈ ಸಮಗ್ರ ವಿಶ್ವ ಮಂಡಲವು ದೇವನ ಲೀಲೆಯೇ? ದೇವ ದೇವನ ಹೊರತು ನಾಥರಿಲ್ಲ. ಅನಾದಿ ಸ್ವರೂಪನಾದ ಸತ್ಯದೇವನ ಓಂಕಾರ ಶಬ್ದವನ್ನು ಹೊಗಳಿರಿ. ಓಹ್ರೀಂ ಮಂತ್ರಗಳನ್ನು ಒಳಗೊಂಡಿರುವ ಅಥರ್ವವೇದದ ವಕ್ತಾರನು ಜನತೆಯನ್ನು, ಪಶುಗಳನ್ನು ಇತರೆಲ್ಲಾ ಜೀವಜಾಲಗಳನ್ನು ಸೃಷ್ಟಿಸಿದನು. ಸಿದ್ಧರೂ, ಜಲಚರಗಳನ್ನೊಳಗೊಂಡ ದೇವತೆಗಳೂ ಆತನನ್ನು ಪಾಲಿಸುತ್ತಾರೆ. ಅದೃಶ್ಯನಾದ ಆ ಸರ್ವಶಕ್ತನ ನಾಮವನ್ನು ಜಪಿಸಿರಿ. ಓಹ್ರೀಂ ಮಂತ್ರದ ಮೂಲಕ ಅಭಿಶಪ್ತರಾದ ಅಸುರ ವರ್ಗವನ್ನು ಸಂಹರಿಸುವ ಅಲ್ಲಾಹನ ದೂತನೇ ಮಹಮ್ಮದ್. ಸತ್ಯ ದೇವನ ವಿನಾ ಇನ್ನಾವ ದೇವನೂ ಇಲ್ಲ."

ಅಲ್ಲೋಪನಿಷತ್ತು ಅಥರ್ವವೇದದ ಒಂದು ಅಧ್ಯಾಯವೆಂದು ವಾಚಸ್ಪತಿಯ ಸಂಸ್ಕೃತ ನಿಘಂಟಿನಲ್ಲಿ ಹೇಳಿದೆ. ಅಲ್ಲೋಪನಿಷತ್ತಿನ ಈ ಪ್ರವಚನ ಮತ್ತು ವಿಮರ್ಶೆಯು ಬ್ರಾಹ್ಮಣರು ಏಕದೇವಾರಾಧನೆಗಾಗಿ ಮಕ್ಕಾದಲ್ಲಿ ಪ್ರಥಮ ದೇವಾಲಯ ನಿರ್ಮಿಸಿದ ಅಬ್ರಹಾಮರ (ಇಬ್‌ರಾಹೀಮ್(ಅ)) ಅನುಯಾಯಿಗಳೆಂಬ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಶಾಸ್ತ್ರಿ ಉಪೇಂದ್ರನಾಥ ಮುಖ್ಯೋಪಾಧ್ಯಾಯರು ಕಲ್ಕತ್ತಾದಲ್ಲಿ ವ್ಯಾಖ್ಯಾನ ಸಹಿತ ಪ್ರಕಟಿಸಿದ ಅಲ್ಲೋಪನಿಷತ್ತಿನ 18ನೆಯ ಸೂಕ್ತದ ಅರ್ಥವನ್ನು ನೋಡಿರಿ.

"ಅಲ್ಲಾ(ದೇವ) ಅವರ್ಣನೀಯ ಗುಣಗಳ ಒಡೆಯನೂ, ಪರಿಪೂರ್ಣನೂ ಸರ್ವಜ್ಞನೂ ಆಗಿದ್ದಾನೆ. ಸರ್ವ ಜ್ಞಾನಿಯೂ, ಪ್ರಕಾಶದ ಪ್ರಕಾಶವೂ ಆಗಿರುವ ಅಲ್ಲಾಹನ ದೂತನೇ ಮಹಾಮದ್. 'ಅಲ್ಲಾ' ಅನಶ್ವರನು, ಏಕನು, ಸದಾ ಪರಿಪೂರ್ಣನು ಮತ್ತು ನಿರಪೇಕ್ಷನು."

## ಕಲ್ಕಿ ಪುರಾಣ

ಹಿಂದೂ ಪುರಾಣಗಳಂತೆ ಧರ್ಮವು ಕ್ಷಯಿಸಿ ಅಧರ್ಮವು ಹೆಚ್ಚಿದಾಗ ದೇವನು ಅವತರಿಸಿ ಧರ್ಮವನ್ನು ಪುನಸ್ಥಾಪಿಸುತ್ತಾನೆ. ದೇವನು ಮಾನವ ಜನ್ಮತಾಳುವನೆಂಬುದನ್ನು ಇಸ್ಲಾಮ್ ಒಪ್ಪುವುದಿಲ್ಲ. ಆದರೆ ಅಂತಹ ಸಂದರ್ಭಗಳಲ್ಲಿ ಮಾನವರಿಂದ ಪ್ರವಾದಿಗಳ ನೇಮಕ ಮಾಡುವನೆಂಬುದು ಇಸ್ಲಾಮಿನ ದೃಷ್ಟಿಕೋನ. ಹಿಂದೂ ಪುರಾಣಗಳಂತೆ 24 ಅವತಾರಗಳಿವೆ. ಅದರಲ್ಲಿ 23 ಅವತಾರ ಮುಗಿದಿದೆ.

ಕಲ್ಕಿ ಅವತಾರವು ಕೊನೆಯದು. ವೇದವ್ಯಾಸನು ಕಲ್ಕಿ ಅವತಾರದ ಕುರಿತು ವಿವರಿಸಿದ್ದಾನೆ. ಕಲ್ಕಿಯ ತಂದೆಗೆ 'ವಿಷ್ಣುಭಕ್ತ' ಮತ್ತು ತಾಯಿಗೆ 'ಸೌಮ್ಯವತಿ' ಎಂಬ ಹೆಸರಿರುವುದು. ಕಲ್ಕಿ ಅವತಾರದ ವಿವರವು ಶ್ರೀಮದ್ಭಗವದ್ಗೀತೆಯಲ್ಲಿದೆ. 'ವಿಷ್ಣುಭಕ್ತ' ಎಂಬುದನ್ನು 'ಅಬ್ದುಲ್ಲಾ' ಎಂದೂ, 'ಸೌಮ್ಯಮತಿ' ಎಂಬುದನ್ನು 'ಆಮಿನಾ' ಎಂದೂ ಅರಬಿಗೆ ಭಾಷಾಂತರಿಸಬಹುದು. ಪ್ರವಾದಿ ಮುಹಮ್ಮದ್‌ರ ತಂದೆಯ ಹೆಸರು ಅಬ್ದುಲ್ಲಾ ಮತ್ತು ತಾಯಿಯ ಹೆಸರು ಆಮಿನಾ ಎಂದಿತ್ತಷ್ಟೆ. ಪುನಃ ನೋಡಿರಿ: ಕಲ್ಕಿಯ ಅವತಾರಕ್ಕಿಂತ ಮುಂಚೆಯೇ ತಂದೆ ತೀರಿಹೋಗುವನು. ಹುಟ್ಟಿದ ಕೂಡಲೇ ತಡವಿಲ್ಲದೇ ತಾಯಿಯೂ ತೀರಿ ಹೋಗುವಳು. "ಕಲ್ಕಿ ಅವತಾರವು ಸ್ವದೇಶದಿಂದ ಉತ್ತರ ದಿಕ್ಕಿನ ಗುಡ್ಡಗಳಿಗೆ ಪಲಾಯನ ಮಾಡುವುದು. ಆದರೆ, ಕೆಲವು ಕಾಲದ ಬಳಿಕ ಅದೇ ಪಟ್ಟಣಕ್ಕೆ ಮರಳಿ ಇಡೀ ದೇಶವನ್ನು ವಶಪಡಿಸಿ ಕೊಳ್ಳುವುದು." ಪ್ರವಾದಿ ಮುಹಮ್ಮದ್‌ರ ತಂದೆಯು ಅವರ ಜನನಕ್ಕಿಂತ ಮುಂಚೆ ತೀರಿದ್ದಾರೆ. ಅವರ ಬಾಲ್ಯಾವಸ್ಥೆಯಲ್ಲಿಯೇ ತಾಯಿಯೂ ನಿಧನ ಹೊಂದಿದ್ದರು. ಹುಟ್ಟೂರಾಗಿದ್ದ ಮಕ್ಕಾದ ಉತ್ತರ ಭಾಗದಲ್ಲಿರುವ ಮದೀನಾಕ್ಕೆ ಅವರು ವಲಸೆ ಹೋಗಬೇಕಾಯಿತು. ತರುವಾಯ ದಿಗ್ವಿಜಯಿಯಾಗಿ ಮಕ್ಕಾಕ್ಕೆ ಮರಳಿ ಬಂದರು. ಪ್ರವಚನ ಮತ್ತು ಇತಿಹಾಸದ ಈ ಹೊಂದಾಣಿಕೆಯನ್ನು ಸುಲಭದಲ್ಲಿ ಕಾಕತಾಳೀಯವೆನ್ನುವಂತಿಲ್ಲ.

## ರಾಮ ಸಂಕ್ರಮ್

'ರಾಮ ಸಂಕ್ರಮ್' ಎಂಬ ಗ್ರಂಥದಲ್ಲಿ ವೇದವ್ಯಾಸನು 12ನೆಯ ಸ್ಕಂದದ 6ನೆಯ ಕಾಂಡದಲ್ಲಿ ಕೆಲವು ಪ್ರವಚನಗಳನ್ನು ನೀಡಿದ್ದಾನೆ. ತುಳಸೀದಾಸರು ಅದನ್ನು ಹಿಂದಿಗೆ ತರ್ಜುಮೆ ಮಾಡಿದ್ದಾರೆ. ಅದರ ಸಂಕ್ಷೇಪ ಹೀಗಿದೆ: "ಅರೇಬಿಯಾದ ಅಧಿಪತಿಯು ಶುಕ್ಲ ಪಕ್ಷದಂತೆ ಶ್ರೇಷ್ಠನು. ಆ ಭೂಮಿ ಅನುಗ್ರಹೀತ. ಎಲೈ ಗುರುವೇ ಕೇಳು! ಆತನಿಂದ ಅಸಂಭಾವ್ಯ ಕಾರ್ಯ (ಪವಾಡ) ಪ್ರಕಟವಾಗುವುದು. ಆತನು ಈಶ್ವರನ ಮಾಮುನಿಯಾಗಿ ಎದ್ದೇಳಿಸಲ್ಪಡುವನು. ವಿಕ್ರಮ ವರ್ಷದ (ವಿಕ್ರಮಾದಿತ್ಯನ ಕಾಲದಿಂದ ಆರಂಭಗೊಂಡ ಶಕ) ಎರಡನೆಯ ಶತಮಾನದಲ್ಲಿ ಆತನು ಅಂಧಕಾರದಲ್ಲಿ ಬಣ್ಣದ ಚಿಟ್ಟೆಯಂತೆ ಹುಟ್ಟುವನು. ಪರಿಸರ ಪ್ರದೇಶ ಹಾಗೂ ಲೋಕದ ಇತರೆಲ್ಲಾ ಕಡೆಗಳಲ್ಲಿಯೂ ನೀತಿ ಪ್ರೇಮಾದಿಗಳಿಂದ ಮತ್ತು

ಎಚ್ಚರಿಕೆ ನೀಡಿ ಎಲ್ಲರಿಗೂ ತನ್ನ ಧರ್ಮವನ್ನು ಮನವರಿಕೆ ಮಾಡಿಕೊಡುವನು. ಆತನ ಸೇವೆ ಮಾಡುವ ಸತ್ಯವಂತ ಮತ್ತು ಬುದ್ಧಿಶಾಲಿಗಳಾದ ನಾಲ್ವರು ಯತಿವರ್ಯರಿರುವರು." ಈ ಪ್ರವಚನದ ಅನೇಕ ವಿಷಯಗಳು ಪ್ರವಾದಿ ಮುಹಮ್ಮದ್‌ರನ್ನು ಹೋಲುತ್ತವೆ. ಉದಾ: ವಿಕ್ರಮಾದಿತ್ಯದ ಕಾಲವು ಕ್ರಿ.ಶ. 380ರಿಂದ 413. ಅದರ ಎರಡನೆಯ ಶತಕದಲ್ಲಿ ಪ್ರವಾದಿ ಮುಹಮ್ಮದ್(ಸ) ಹುಟ್ಟಿದರು. ಅವರಿಗೆ ಅಬೂಬಕರ್, ಉಮರ್, ಉಸ್ಮಾನ್ ಮತ್ತು ಅಲೀ ಎಂಬ ನಾಲ್ವರು ಖಲೀಫರಿದ್ದರು. ಅವರ ಸಿದ್ಧಾಂತವು ವಿಶ್ವವ್ಯಾಪಿಯಾಯಿತು. ಈ ಪ್ರವಚನವೂ ಪ್ರವಾದಿ ಮುಹಮ್ಮದ್‌ರ(ಸ) ರಾಯಭಾರತ್ವದ ವಾಸ್ತವಿಕಾಂಶಗಳತ್ತ ಬೆಟ್ಟು ಮಾಡುತ್ತಿದೆ.

## ಬೌದ್ಧ ಗ್ರಂಥಗಳಲ್ಲಿ

'ದಿಗಾನಿಕಾಯ' ಎಂಬ ಪ್ರಖ್ಯಾತ ಬೌದ್ಧ ವೇದದಲ್ಲಿ ಬುದ್ಧನ ಬಳಿಕ 'ಮೈತೇಯ ಬುದ್ಧ'ನು ಅವತರಿಸಲಿರುವನೆಂದು ಭವಿಷ್ಯ ನುಡಿಯಲಾಗಿದೆ. 'ದಿ ಗೋಸ್ಪೆಲ್ ಓಫ್ ಬುದ್ಧ' ಎಂಬ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿರುವ ಈ ಸಂಭಾಷಣೆಯನ್ನು ಗಮನಿಸಿರಿ:

ಆನಂದನು ಅನುಗ್ರಹೀತನೊಡನೆ (ಬುದ್ಧನೊಡನೆ) ಕೇಳಿದನು:

"ನೀವು ಹೋದ ಬಳಿಕ ನಮಗೆ ಕಲಿಸುವವರು ಯಾರು?" ಆಗ ಅನುಗ್ರಹೀತನು ಉತ್ತರ ನೀಡಿದನು: "ಲೋಕಕ್ಕೆ ಬಂದಿರುವ ಬುದ್ಧರಲ್ಲಿ ನಾನು ಪ್ರಥಮನೋ ಕೊನೆಯವನೋ ಅಲ್ಲ. ಸಮಯ ಬಂದಾಗ ಪರಿಶುದ್ಧ, ವಿಜ್ಞ ಮತ್ತು ಬುದ್ಧಿಶಾಲಿಯಾದ ಓರ್ವ ಬುದ್ಧನು ಲೋಕಕ್ಕೆ ಆಗಮಿಸುತ್ತಾನೆ. ಆತನು ಪ್ರಪಂಚ ಜ್ಞಾನಿಯೂ ಅಸಾಮಾನ್ಯ ಜನ ನಾಯಕನೂ ದೇವಚರರ (Angels) ಮತ್ತು ಮಾನವರ ಯಜಮಾನನೂ ಆಗಿರುತ್ತಾನೆ. ನಾನು ಕಲಿಸಿರುವ ಚಿರಂತನ ಸತ್ಯಗಳನ್ನು ಆತನು ಕಲಿಸುವನು, ಆತನು ಬೋಧಿಸುವ ಧರ್ಮವು ಆರಂಭ, ಔನ್ನತ್ಯ ಮತ್ತು ಅಂತ್ಯಗಳಲ್ಲಿ ಪ್ರತಾಪಶಾಲಿಯಾಗಿರುವುದು. ನಾನು ಉದ್ಬೋಧಿಸಿರುವಂತೆ ಸಮಗ್ರ ಮತ್ತು ಪವಿತ್ರವಾದ ಧಾರ್ಮಿಕ ಜೀವನವನ್ನು ಆತನು ಬೋಧಿಸುವನು. ನನಗೆ ನೂರಾರು ಅನುಯಾಯಿಗಳಿರುವಂತೆ ಆತನಿಗೆ ಸಾವಿರಗಟ್ಟಲೆ ಅನುಯಾಯಿಗಳಿರುವರು."

ಆನಂದನು ಪ್ರಶ್ನಿಸಿದನು: "ನಾವು ಆತನನ್ನು ಗುರುತಿಸುವುದು ಹೇಗೆ" ಅನುಗ್ರಹೀತನು

ಉತ್ತರಿಸಿದನು: "ಆತನು ಮೈತ್ರೇಯನೆಂದು ಖ್ಯಾತನಾಗುವನು." (The Gospel of Buddha, National Book Trust of Indian, New Delhi- 16, Third Indian Edition 1917- P218) ಮೈತ್ರೇಯ ಎಂಬ ಅನುವಾದಿತ ಪದಕ್ಕೆ ಕರುಣೆಯೆಂಬ ಅರ್ಥವಿದೆ. (Herbest Baynes The way Buddha-P 15) ಅರಬಿಯಲ್ಲಿ ಅದಕ್ಕೆ 'ರಹ್ಮತ್' ಎಂಬ ಸಮಾನ ಪದವಿದೆ. ಕುರ್‌ಆನಿನಲ್ಲಿ ಅಲ್ಲಾಹನು ಪ್ರವಾದಿ ಮುಹಮ್ಮದ್‌ರನ್ನು(ಸ) ಅಭಿಸಂಬೋಧಿಸುತ್ತಾ ಹೀಗೆಂದಿದ್ದಾನೆ:

**"ಪೈಗಂಬರರೇ, ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ." (ಪವಿತ್ರ ಕುರ್‌ಆನ್: 21: 107)** ಆದ್ದರಿಂದ ಈ ಭವಿಷ್ಯವಾಣಿಯು ಪ್ರವಾದಿ ಮುಹಮ್ಮದ್‌ರಿಗೆ(ಸ) ಸಂಬಂಧ ಪಟ್ಟಿದೆಯೆಂದು ಊಹಿಸಿದರೆ ತಪ್ಪಾಗಲಾರದು.

## ಬೈಬಲ್

ಯೇಸು ತನ್ನ ಅನುಯಾಯಿಗಳಿಗೆ ಹೇಳಿದನು: "ನೀವು ನನ್ನನ್ನು ಪ್ರೀತಿಸುವಿರಾದರೆ, ನೀವು ನನ್ನ ಆಜ್ಞೆಗಳನ್ನು ಕೈಗೊಂಡು ನಡೆಯುವಿರಿ. ಆಗ ನಾನು ತಂದೆಯನ್ನು ಕೇಳಿಕೊಳ್ಳುವೆನು. ಆತನು ನಿಮಗೆ ಬೇರೊಬ್ಬ ಸಹಾಯಕನನ್ನು ಸದಾ ಕಾಲ ನಿಮ್ಮ ಸಂಗಡ ಇರುವುದಕ್ಕೆ ಕೊಡುವನು. ಆ ಸಹಾಯಕನು ಯಾರೆಂದರೆ ಸತ್ಯದ ಆತ್ಮನೇ." **(ಯೋಹಾನ 14, 15, 17)**

ಯೇಸು ಪುನಃ ಹೇಳಿದನು: "ನಾನು ನಿಮಗೆ ಹೇಳಬೇಕಾದದ್ದು ಇನ್ನೂ ಬಹಳ ಉಂಟು, ಆದರೆ ಸದ್ಯಕ್ಕೆ ಅದನ್ನು ಹೊರಲಾರಿರಿ. ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನಡೆಸಿಕೊಂಡು ಹೋಗಿ ಸಕಲ ವಿಷಯದಲ್ಲಿಯೂ ಸತ್ಯಕ್ಕೆ ಸೇರಿಸುವನು." **(16: 12-13)** ಯೇಸುವಿಗಿಂತ ಮುಂಚೆಯೇ ಯೇಸುವಲ್ಲದ ಇನ್ನೋರ್ವ ಪ್ರವಾದಿಯನ್ನು ಯಹೂದಿಯರು ನಿರೀಕ್ಷಿಸುತ್ತಿದ್ದರೆಂದು ಬೈಬಲ್‌ನಿಂದ ಗ್ರಹಿಸಬಹುದು. ಬೈಬಲ್ ಹೇಳುತ್ತದೆ: ಯಹೂದಿಯರು ಯೆರೂಸಲೇಮಿನಿಂದ ಯಾಜಕರನ್ನೂ ಅವನ ಬಳಿಗೆ ಕಳುಹಿಸಿ ನೀನು ಯಾರೆಂದು ಕೇಳಿದ್ದಕ್ಕೆ ಅವನು ಮರೆಮಾಚದೆ ನಾನು ಕ್ರಿಸ್ತನಲ್ಲವೆಂದು ಎಲ್ಲರ ಮುಂದೆ ಹೇಳಿದನು. ಹಾಗಾದರೆ ನೀನು ಯಾರು, ಏಲಿಯನೋ? ಎಂದು ಅವರು ಕೇಳಲು, 'ಅಲ್ಲ'ವೆಂದನು. ನೀನು ಬರಬೇಕಾದ ಆ ಪ್ರವಾದಿಯೋ? ಅಂದದ್ದಕ್ಕೂ

'ಅಲ್ಲ'ವೆಂದನು. ನೀನು ಕ್ರಿಸ್ತನೂ ಏಲಿಯನೂ ಆ ಪ್ರವಾದಿಯೂ ಅಲ್ಲವಾದರೆ ಸ್ನಾನ ಮಾಡಿಸುವುದೇನು ಎಂದು ಅವನನ್ನು ಕೇಳಿದರು." (ಯೋಹಾನ 1: 19-25)

ಇಲ್ಲಿ ಆ ಪ್ರವಾದಿಯೆಂದು ಹೇಳಿರುವುದು ಯೇಸುವನ್ನಲ್ಲವೆಂಬುದು ವ್ಯಕ್ತ. ನೀನು ಕ್ರಿಸ್ತನೇ ಅಥವಾ ನೀನು ಬರಲಿರುವ ಆ ಪ್ರವಾದಿಯೇ ಎಂದು ಬೇರೆಬೇರೆಯಾಗಿ ಪ್ರಶ್ನಿಸಲಾಗಿದೆಯಲ್ಲವೇ? ಇದು ಏಸುವಿನ ನಂತರ ಆಗಮಿಸಲಿರುವ ಮುಹಮ್ಮದ್‌ರ(ಸ) ಬಗ್ಗೆಯೇ ಪ್ರಸ್ತಾಪಿಸಿದ್ದಾಗಿರಬೇಕು. ಯಹೂದಿಯರ ವೇದ ಗ್ರಂಥದಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಕುರಿತು ಉಲ್ಲೇಖವಿದೆಯೆಂದು ನಂಬಲು ಐತಿಹಾಸಿಕ ಕಾರಣಗಳಿವೆ.

"ಇವರ ಸ್ವದೇಶದವರಲ್ಲಿ ನಿನ್ನಂತಹ ಪ್ರವಾದಿಯನ್ನು ಅವರಿಗೋಸ್ಕರ ಏರ್ಪಡಿಸುವೆನು. ಅವನ ಬಾಯಿಂದ ನನ್ನ ಮಾತುಗಳನ್ನು ನುಡಿಸುವೆನು. ನಾನು ಅವನಿಗೆ ಆಜ್ಞಾಪಿಸಿದ್ದನ್ನೆಲ್ಲಾ ಅವನು ಅವರಿಗೆ ತಿಳಿಸುವನು. ಅವನು ನನ್ನ ಹೆಸರಿನಲ್ಲಿ ಹೇಳಿದ ಮಾತುಗಳಿಗೆ ಯಾರು ಕಿವಿಗೊಡುವುದಿಲ್ಲವೋ ಅಂಥವರನ್ನು ನಾನು ಶಿಕ್ಷಿಸುವೆನು." (ಧರ್ಮೋಪದೇಶ ಕಾಂಡ 18: 18-19)

ಇಲ್ಲಿ ಸ್ವದೇಶದವರಲ್ಲಿ ಎಂಬುದು ಇಸ್ರೇಲರ ಸಹೋದರ ಜನಾಂಗವಾಗಿರುವ ಇಸ್ಮಾಈಲ್ ಜನಾಂಗವನ್ನು ಸೂಚಿಸುತ್ತದೆ. ಕ್ರೈಸ್ತರ ಧರ್ಮವಿಶ್ವಾಸದಂತೆ ಯೇಸುವಿಗೆ ಓರ್ವ ನ್ಯಾಯಾಧೀಶನ ಸ್ಥಾನವಿದೆಯೇ ವಿನಃ ಮೂಸಾರಂತೆ ಓರ್ವ ಕಾನೂನುದಾತನ ಸ್ಥಾನವಲ್ಲ. (Revd, David Benjamin, Mohamad in the Bible-P.8) ಧರ್ಮೋಪದೇಶಕಾಂಡವು ಮೂಸಾರೊಂದಿಗೆ 'ನಿನ್ನಂತೆ' ಎಂದು ಹೇಳಿದೆ. ಪ್ರವಾದಿ ಮುಹಮ್ಮದ್‌ರು(ಸ) ಒಂದು ಕಾನೂನು ಗ್ರಂಥದೊಂದಿಗೆ ಆಗಮಿಸಿದರೆಂದು ಪ್ರತ್ಯೇಕ ಹೇಳಬೇಕಾಗಿಲ್ಲವಷ್ಟೇ.

ಅವನು ಹೇಳಿದ್ದೇನೆಂದರೆ:

"ಯಹೋವನನು ಸೀನಾಯ್ ಬೆಟ್ಟದಿಂದ ಬಂದು
ಸೇಯೀರ್ ಎಂಬ ಬೆಟ್ಟದ ಸೀಮೆಯೊಳಗಿಂದ ಪ್ರಕಾಶಿಸಿ
ಫಾರಾನ್ ಪರ್ವತದಿಂದ ಹೊಳೆದು
ಲಕ್ಷಾಂತರ ಸಂತರ ಮಧ್ಯದಿಂದ ಅವರಿಗೋಸ್ಕರ ದಯಮಾಡಿದನು,
ಆತನ ಬಲ ಪಾರ್ಶ್ವದಲ್ಲಿ
ಅಗ್ನಿ ಸದೃಶವಾದ ಧರ್ಮಶಾಸ್ತ್ರವಿತ್ತು." (ಧರ್ಮೋಪದೇಶ ಕಾಂಡ 33: 1-2)

ಇಸ್ರೇಲರಿಗೂ, ಯೇಸುವಿಗೂ ಫಾರಾನ್ ಪರ್ವತದೊಂದಿಗೆ ಸಂಬಂಧವಿಲ್ಲ

(Revd, David Benjamin, Kaldani, B.D. Bishop of Urumiah, Mohamad in the Bible, Abbas Manzil Library Allahabad 3 P.8) ಅಬ್ರಹಾಮರ ಪತ್ನಿ ಹಾಜರ ಮತ್ತು ಪುತ್ರ ಇಸ್ಮಾಈಲ್‌ರು ಫಾರಾನ್ ಮರುಭೂಮಿಯಲ್ಲಿ ತಂಗಿದರೆಂದು ಆದಿಕಾಂಡ 21: 21ರಲ್ಲಿ ಹೇಳುತ್ತದೆ. ಇಸ್ಮಾಈಲ್ ಮತ್ತು ಅಬ್ರಹಾಮರು ಒಟ್ಟಿಗೆ ಮಕ್ಕಾದ ಪವಿತ್ರ ದೇವಭವನ ನಿರ್ಮಿಸಿದರು. ಅರಬರು ಇಸ್ಮಾಈಲ್‌ರ ಪುತ್ರ ಕೆದರ್‌ರ ಸಂತಾನದವರು. ಅವರು ಇಂದಿಗೂ ಫಾರಾನ್ ಮರುಭೂಮಿಯಲ್ಲಿ ವಾಸಿಸುತ್ತಾರೆ. (Revd, David Benjamin Mohamed in the Bible p.9) ಪ್ರವಾದಿ ಮುಹಮ್ಮದ್‌ರ(ಸ) ವಂಶ ಪರಂಪರೆಯು ಕೆದರ್‌ರ ಮೂಲಕ ಇಸ್ಮಾಈಲ್‌ರಲ್ಲಿಗೆ ತಲಪುತ್ತದೆ. ಅವರು 10,000 ಅನುಯಾಯಿಗಳೊಂದಿಗೆ ಪುನಃ ಮಕ್ಕಾ ಪ್ರವೇಶಿಸಿದರು. ಅವರು ಪ್ರಕಾಶಮಾನವಾದ ವೇದಗ್ರಂಥವೊಂದನ್ನು ಜನರಿಗೆ ನೀಡಿದರು. ಈ ಮೂಲಕ ಪ್ರಸ್ತುತ ಭವಿಷ್ಯವಾಣಿಯು ಅಕ್ಷರಶಃ ಸಾಕ್ಷಾತ್ಕಾರವಾಗಿದೆಯಲ್ಲವೇ?

ಬೈಬಲ್‌ನ ಭಾಗವಾಗಿರುವ ಹಬಕ್ಕೂಕ 3:3ರಲ್ಲಿ ಹೀಗಿದೆ:

"ದೇವನು ತೇಮಾನಿನಿಂದ ಬರುತ್ತಾನೆ. ಪವಿತ್ರನು ಫಾರಾನ್ ಪರ್ವತದಿಂದ ಬರುತ್ತಾನೆ. ಸೇಲಾ, ಆತನ ಪ್ರಭೆಯು ಆಕಾಶ ಮಂಡಲವನ್ನು ಆವರಿಸುತ್ತದೆ. ಆತನ ಸ್ತುತಿಯಿಂದ ಭೂಮಂಡಲವು ತುಂಬುತ್ತದೆ." ಮುಹಮ್ಮದ್(ಸ) ಎಂದರೆ ಸ್ತುತಿಸಲ್ಪಟ್ಟವನೆಂಬ ಅರ್ಥವಿರುವುದನ್ನು ಜ್ಞಾಪಿಸಿರಿ.

ಪ್ರವಾದಿ ಮುಹಮ್ಮದ್‌ರನ್ನು(ಸ) ಉಪಚರಿಸುತ್ತಿದ್ದ ಓರ್ವ ಯಹೂದಿ ಬಾಲಕನಿದ್ದ. ಅವನು ಅನಾರೋಗ್ಯಕ್ಕೀಡಾದಾಗ ಪ್ರವಾದಿವರ್ಯರು(ಸ) ಅವನನ್ನು ನೋಡಲು ಹೋದರು. ಆಗ ಆ ಬಾಲಕನ ಬಳಿ ಆತನ ತಂದೆಯು ಕುಳಿತು ತೌರಾತ್ (ಹಳೆ ಒಡಂಬಡಿಕೆ) ಓದುತ್ತಿದ್ದನು. ಪ್ರವಾದಿ ಮುಹಮ್ಮದ್‌ರು ನನ್ನ ಬಗ್ಗೆ ಅದರಲ್ಲಿ ಪ್ರಸ್ತಾಪಿಸಿಲ್ಲವೇ ಎಂದು ಪ್ರಶ್ನಿಸಿದರು. ಇಲ್ಲವೆಂದಾಗ ಯಹೂದಿ ಬಾಲಕನು "ತಂದೆ ಹೇಳಿದ್ದು ಸರಿಯಲ್ಲ. ಪ್ರವಾದಿ ಮುಹಮ್ಮದ್‌ರ(ಸ) ಗುಣಗಾನವು ಹಳೆಯ ಒಡಂಬಡಿಕೆಯಲ್ಲಿದೆ"ಯೆಂದು ಹೇಳಿದನು. (ಇಬ್ನು ಹಿಶಾಮ್ ಭಾಗ 2, ಪುಟ: 162) ಮದೀನಾದ ಯಹೂದಿಯರಿಗೆ ಅಲ್ಲಿನ ಅರಬರೊಂದಿಗೆ ಕಲಹವುಂಟಾದಾಗ, ನಮಗೋರ್ವ ಪ್ರವಾದಿ ಬರಲಿಕ್ಕಿದ್ದಾರೆ. ಅವರು ಬಂದ ಬಳಿಕ ಅವರ ಸಹಾಯದಿಂದ ನಾವು ಅರಬರನ್ನು ಸೋಲಿಸುತ್ತೇವೆಂದು ಹೇಳುತ್ತಿದ್ದರು. ಪ್ರವಾದಿ ಮುಹಮ್ಮದ್‌ರ(ಸ) ಧರ್ಮ ಬೋಧನೆ ಆರಂಭಿಸಿದಾಗ ಅವರನ್ನು ಮದೀನಾ ನಿವಾಸಿಗಳು ಆಹ್ವಾನಿಸಿರುವುದಕ್ಕೆ ಇದೊಂದು ಕಾರಣವಾಗಿತ್ತು.

"ಆದರೆ ಈಗ ನಾನು ನನ್ನನ್ನು ಕಳುಹಿಸಿಕೊಟ್ಟಾತನ ಬಳಿಗೆ ಹೋಗುತ್ತೇನೆ... ಆದರೂ ನಾನು ನಿಮಗೆ ಸತ್ಯವನ್ನು ಹೇಳುತ್ತೇನೆ. ಕೇಳಿರಿ: ನಾನು ಹೋಗುವುದು ನಿಮಗೆ ಹಿತಕರವಾಗಿದೆ. ಏಕೆಂದರೆ ನಾನು ಹೋಗದಿದ್ದರೆ ಆ ಸಹಾಯಕನು (Conforter)[1] ನಿಮ್ಮ ಬಳಿಗೆ ಬರುವುದಿಲ್ಲ. ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳುಹಿಸಿಕೊಡುತ್ತೇನೆ. ಅವರು ಪಾಪ, ನೀತಿ ಮತ್ತು ನ್ಯಾಯ ತೀರ್ಪಿನ ಕುರಿತು ಲೋಕಕ್ಕೆ ತಿಳುವಳಿಕೆ ನೀಡುವರು... ನಾನು ನಿಮಗೆ ಹೇಳಬೇಕಾದದ್ದು ಇನ್ನೂ ಬಹಳ ಉಂಟು, ಆದರೆ ಸದ್ಯಕ್ಕೆ ನೀವು ಅದನ್ನು ಹೊರಲಾರಿರಿ. ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನಡೆಸಿಕೊಂಡು ಹೋಗಿ ಸಕಲ ವಿಷಯದಲ್ಲಿಯೂ ಸತ್ಯಕ್ಕೆ ಸೇರಿಸುವನು. ಆತನು ತನ್ನಷ್ಟಕ್ಕೆ ತಾನೇ ಮಾತನಾಡದೆ ಕೇಳಿದ ಮಾತುಗಳನ್ನೇ ಆಡುವನು ಮತ್ತು ಮುಂದಾಗುವ ಸಂಗತಿಗಳನ್ನು ನಿಮಗೆ ತಿಳಿಸುವನು. (ಯೋಹಾನ 16:5, 7-9, 12, 13) "ನಾನು ಹೋದರೆ ಅವನು ನಿಮ್ಮ ಬಳಿಗೆ ಬರುವನು" ಎಂಬ ಮಾತಿನಲ್ಲಿ 'ಅವನು' ಎಂದು ಸ್ಪಷ್ಟಗೊಳಿಸಿರುವುದು ಬರಲಿರುವ ಏಸುವಿನ ಕುರಿತಲ್ಲವೆಂಬುದು ವ್ಯಕ್ತವಾಗುತ್ತದೆ. ಇಲ್ಲಿ ಏಸುವಿನ ಪುನರೋದಯ ಪ್ರಸ್ತಾಪಿಸಲ್ಪಟ್ಟಿರುವುದಲ್ಲವೆಂದು ಗಮನಿಸಿದರೆ ವ್ಯಕ್ತವಾಗುತ್ತದೆ. ಬರಲಿರುವ ಪ್ರವಾದಿಯು ತನ್ನಿಷ್ಟದಂತೆ ಮಾತನಾಡುವುದಿಲ್ಲ, ತನಗೆ ದೊರೆತ ದೇವವಾಣಿಯನ್ನು ಯಥಾವತ್ತಾಗಿ ಉಚ್ಚರಿಸುವನೆಂದು ಹೇಳಿದೆ. ಕುರ್‌ಆನ್ ಹೇಳುತ್ತದೆ: "ಸ್ವಇಚ್ಛೆಯಿಂದ ಅವರು ಮಾತನಾಡುವುದಿಲ್ಲ. ಆದೇಶಿತ ವಹ್ಯ್(ದಿವ್ಯವಾಣಿ) ವಿನಾ ಇದು ಬೇರೇನಲ್ಲ."

(ಪವಿತ್ರ ಕುರ್‌ಆನ್: 53: 3-4)

ಯೇಸು ಪುನಃ ಹೇಳುತ್ತಾನೆ, "ಆದರೂ ತಂದೆಯು ನನ್ನ ಹೆಸರಿನಲ್ಲಿ ಕಳುಹಿಸಲಿರುವ ಪರಿಶುದ್ಧಾತ್ಮನೆಂಬ ಸಹಾಯಕನು ನಿಮಗೆ ಸಕಲವನ್ನು ಉಪದೇಶಿಸಿ ಕೊಟ್ಟು ನಾನು ನಿಮಗೆ ಹೇಳಿರುವುದನ್ನೆಲ್ಲಾ ಜ್ಞಾಪಿಸಿ ಕೊಡುವನು."

(ಯೋಹಾನ, 14, 15, 17)

ಇನ್ನೊಂದು ಸುವಾರ್ತೆಯು ಹೀಗಿದೆ:

"ಅರಬ್ ದೇಶದ ಕುರಿತಾದ ದೈವೋಕ್ತಿ, ಬೇದಾನ್ಯರೇ, ಒಂಟೆ ಸವಾರರೇ

---

1. ಇಂಗ್ಲಿಷ್‌ನಲ್ಲಿ Conforter ಎಂಬ ಶಬ್ದವಿದೆ. ಪುರಾತನ ಬೈಬಲ್‌ನಲ್ಲಿ Periklutos ಎಂಬ ಪದವಿದೆಯೇ ಹೊರತು Conforter ಎಂಬರ್ಥದ Paraklutos ಪದವಿಲ್ಲವೆಂದೂ ಹೋನ್ ತನ್ನ 'Introduction to the critical study of the Scriptures' ಎಂಬ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ. Periklutos ಎಂಬ ಪದಕ್ಕೆ 'ಸ್ತುತ್ಯರ್ಹ, ಹೊಗಳಲ್ಪಟ್ಟವ' ಎಂಬರ್ಥವಿದೆ. ಇದು ಅರಬಿಯ 'ಮುಹಮ್ಮದ್' ಎಂಬ ಪದಕ್ಕೆ ಸಮಾನವಾಗಿದೆ.

ಮರುಭೂಮಿಯಲ್ಲಿ ಬೀಡು ಬಿಡುವವರೇ, ನೀವು ಬಾಯಾರಿದವರಿಗೆ ನೀರು ತಂದು ಕೊಡಿರಿ, ತೇಮಾ ನಾಡಿನ ನಿವಾಸಿಗಳೇ ವಲಸೆ ಬಂದವರಿಗೆ ಊಟ ಬಡಿಸಿರಿ. ಅವರು ಹಿರಿದ ಕತ್ತಿ, ಹೂಡಿದ ಬಿಲ್ಲು ಮತ್ತು ಯುದ್ಧದ ಬಾಧೆಯಿಂದ ತಪ್ಪಿಸಿ ಓಡಿಬಂದಿದ್ದಾರಷ್ಟೇ. ಕರ್ತನು ನನಗೆ ಹೇಳಿರುವುದೇನೆಂದರೆ, ಗುಲಾಮತನದ ವಾಯಿದೆಯ ಪ್ರಕಾರ ಒಂದು ವರ್ಷದೊಳಗೆ ಕೇದಾರಿನ ಸಕಲ ವೈಭವವೂ ಅಳಿದು ಹೋಗುವುದು." (ಯಶಾಯ, 21:13-16) ಮಕ್ಕಾದಲ್ಲಿ ಮರ್ದನ ಸಹಿಸಲಾಗದೆ ಮದೀನಾಕ್ಕೆ ವಲಸೆ ಹೋದ ಪ್ರವಾದಿ ಮುಹಮ್ಮದ್(ಸ) ಮತ್ತು ಅವರ ಅನುಯಾಯಿಗಳನ್ನು ಈ ಸುವಾರ್ತೆ ಜ್ಞಾಪಕಕ್ಕೆ ತರುತ್ತಿದೆ. ಇಂತಹ ಅನೇಕ ಸುವಾರ್ತೆಗಳು ಬೈಬಲ್‌ನಲ್ಲಿವೆ. ಇಂದು ಉಳಿದಿರುವ ಪೂರ್ವಕಾಲ ವೇದ ಗ್ರಂಥಗಳೆಲ್ಲವೂ ತಿದ್ದುಪಡಿ ಮತ್ತು ಬದಲಾವಣೆಗಳಿಗೆ ಗುರಿಯಾಗಿದೆಯೆಂದು ಮುಸ್ಲಿಮರು ನಂಬುತ್ತಾರೆ. ಆದರೂ ಇಂದು ಉಳಿದಿರುವ ವೇದಗ್ರಂಥಗಳಲ್ಲಿಯೇ ಪ್ರವಾದಿ ಮುಹಮ್ಮದ್‌ರ ಪ್ರಸ್ತಾಪವಿರು ವುದನ್ನು ನಾವು ಕಾಣುತ್ತೇವೆ. ಕುರ್‌ಆನ್ ಹೇಳುತ್ತದೆ: ಮರ್ಯಮರ ಪುತ್ರ ಈಸಾ ಹೇಳಿದರು: "ಬನೀ ಇಸ್ರಾಈಲರೇ, ನಾನು ನಿಮ್ಮ ಕಡೆಗೆ ಅಲ್ಲಾಹನಿಂದ ಕಳುಹಿಸಲ್ಪಟ್ಟ ಸಂದೇಶವಾಹಕ ನಾಗಿರುತ್ತೇನೆ. ನಾನು ನನಗಿಂತ ಮೊದಲು ಬಂದಿರುವ ತೌರಾತನ್ನು ದೃಢೀಕರಿಸುವವನು ಮತ್ತು ನನ್ನ ಬಳಿಕ ಬರಲಿರುವ ಅಹ್ಮದ್ ಎಂಬ ಹೆಸರಿನ ರಸೂಲರ ಕುರಿತು ಸುವಾರ್ತೆ ನೀಡಿದವನಾಗಿದ್ದೇನೆ.... **(ಪವಿತ್ರ ಕುರ್‌ಆನ್: 61: 6)**

ಏಸುವಿನ ಮಾತುಗಳು ನಮಗೆ ಯಥಾರೂಪದಲ್ಲಿ ದೊರೆಯುವ ಬದಲಾಗಿ ಗ್ರೀಕ್ ಮತ್ತು ಲ್ಯಾಟಿನ್ ತರ್ಜುಮೆಗಳಲ್ಲಷ್ಟೇ ಲಭ್ಯವಿದೆ. ಅವುಗಳಿಂದ ಬೇರೆ ಭಾಷೆಗಳಿಗೆ ಬೈಬಲ್ ತರ್ಜುಮೆ ಗೊಂಡಿದೆ. ತರ್ಜುಮೆ ಮಾಡುವಾಗ ಹೆಸರುಗಳನ್ನು ತರ್ಜುಮೆ ಮಾಡುವ ಸಂಪ್ರದಾಯವಿತ್ತು. ಆದ್ದರಿಂದ ಯೇಸುವು 'ಪ್ರವಾದಿ ಮುಹಮ್ಮದ್'ರ ಬಗ್ಗೆ ಯಾವ ಪದವನ್ನು ಪ್ರಯೋಗಿಸಿ ದ್ದರೆಂಬುದನ್ನು ಈಗ ಪ್ರಚಾರದಲ್ಲಿರುವ ಬೈಬಲ್‌ಗಳಿಂದ ತಿಳಿಯಲು ನಮಗೆ ಕಷ್ಟವಿದೆ. ಆದರೂ ಇತರ ವಿವರಣೆ, ಸಂದರ್ಭ ಮತ್ತು ಪದ ಪ್ರಯೋಗಗಳಿಂದ ಅವರು ಪ್ರವಾದಿ ಮುಹಮ್ಮದ್‌ರ ಕುರಿತು ಭವಿಷ್ಯ ನುಡಿದಿದ್ದರೆಂದು ನಂಬಬಹುದಾಗಿದೆ. ಯೇಸುವಿನ ಶಿಷ್ಯನಾಗಿದ್ದ ಬರ್ನಾಬಾಸನ ಸುವಾರ್ತೆಗಳಲ್ಲಿ, ಬರಲಿರುವ ಪ್ರವಾದಿಯ ಹೆಸರು 'ಮುಹಮ್ಮದ್" ಎಂದಿರುವುದೆಂದು ಸ್ಪಷ್ಟವಾಗಿ ಹೇಳಿದೆ. ಮತ್ತಾಯ, ಮಾರ್ಕ್ ಮತ್ತು ಲೂಕರಂತೆಯೇ ಬರ್ನಾಬಾಸ್ ಯೇಸುವಿನ ಪ್ರಮುಖ ಶಿಷ್ಯರಲ್ಲೋರ್ವನಾಗಿದ್ದನು. ಆತನ ಕುರಿತು ಈಗ

ಪ್ರಚಾರದಲ್ಲಿರುವ ಬೈಬಲ್‌ನಲ್ಲಿಯೇ 'ಕೊಲೋಸಿಯರ ಲೇಖನ'ದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. (4: 10) ಮತ್ತಾಯ ಮತ್ತು ಲೂಕರಂತೆಯೇ ಬರ್ನಾಬಾಸನೂ ಸುವಾರ್ತೆಗಳನ್ನು ಬರೆದಿದ್ದಾನೆ. ಆರಂಭ ಕಾಲದಲ್ಲಿ ಆ ಸುವಾರ್ತೆಯು ಬಳಕೆಯಲ್ಲಿತ್ತು. ಅದರ ಕೈಬರಹ ಪ್ರತಿಯು ವಿಯೆನ್ನಾದ ಇಂಪೀರಿಯಲ್ ಲೈಬ್ರರಿಯಲ್ಲಿ ಸುರಕ್ಷಿತವಿದೆ. ಆ ಸುವಾರ್ತೆಯಲ್ಲಿ ಪ್ರವಾದಿ ಮುಹಮ್ಮದರ(ಸ) ಕುರಿತು ಸ್ಪಷ್ಟ ಉಲ್ಲೇಖವಿದೆ. ಅಲ್ಲದೇ ಸ್ವಯಂ ಯೇಸುವೇ, ತನ್ನನ್ನು ಕೆಲವರು 'ದೇವ ಪುತ್ರ'ನೆಂದು ಕರೆಯುವುದನ್ನು ವಿರೋಧಿಸಿದ್ದರು. ಬರ್ನಾಬಾಸರ ಸುವಾರ್ತೆಯಲ್ಲಿ, ಬರಲಿರುವ ಪ್ರವಾದಿಯ ಕುರಿತು ಅನುಯಾಯಿಗಳು ಕೇಳಿದ ಪ್ರಶ್ನೆಗೆ ಉತ್ತರವಾಗಿ, 'ಆತನ ಹೆಸರು ಮುಹಮ್ಮದ್ (Mohammed is his blessed name) ಎಂದು ಹೇಳಿದೆ. (Gospel of Barnabas, Part 97) ತನ್ನ ಕುಷ್ಠರೋಗವನ್ನು ಗುಣಪಡಿಸಬೇಕೆಂದು ಪ್ರಾರ್ಥಿಸಿದ ಓರ್ವನಿಗೆ, ಯೇಸುವು ದೇವನೊಡನೆ ವಿನಂತಿಸಿದ ಬಳಿಕ, "ನಾನು ಕೇವಲ ನಿಮ್ಮಂತಹ ಓರ್ವ ಮನುಷ್ಯ" ಎಂದು ಹೇಳಿದರು. ("for I am a man as thou art," The Gospal of Barnabas, First SermanII)

ಯೇಸುವು ತನ್ನನ್ನು 'ದೇವಪುತ್ರ'ನೆಂದು ಕರೆದ ಜನರನ್ನುದ್ದೇಶಿಸಿ ಹೀಗೆಂದರು: "ನಾನು ಮಾನವ ಸ್ತ್ರೀಗೆ ಜನಿಸಿದ ಓರ್ವ ಮನುಷ್ಯ. ನಾನು ದೇವನ ನ್ಯಾಯ ನೀತಿಗಳಿಗೆ ಬದ್ಧನಾಗಿದ್ದೇನೆ. ಇತರ ಮನುಷ್ಯರಂತೆಯೇ ನಾನು ಸಂಕಷ್ಟಗಳನ್ನು ಸಹಿಸಿ ಜೀವಿಸುತ್ತೇನೆ." ಆಗ ರೋಮನ್ ಗವರ್ನರ್ ಹೇಳಿದ:

"ನೀವು ಮಾಡುತ್ತಿರುವ ಕಾರ್ಯವನ್ನು ಓರ್ವ ಮಾನವನಿಂದ ಮಾಡಲು ಸಾಧ್ಯವಿಲ್ಲ. ಆದ್ದರಿಂದ ನೀವು ಹೇಳುವುದನ್ನು ನಮಗೆ ಗ್ರಹಿಸಲು ಸಾಧ್ಯವಾಗುವುದಿಲ್ಲ." ಅದಕ್ಕೆ ಉತ್ತರವಾಗಿ ಯೇಸು ಹೀಗೆಂದರು:

"ಮೂಸಾ ತನ್ನ ಬೆತ್ತದಿಂದ ನೀರನ್ನು ರಕ್ತವಾಗಿಸಿದರು. ಸಮುದ್ರವನ್ನು ಸೀಳಿದರು. ಫರೋವನನ್ನು ಅದರಲ್ಲಿ ಮುಳುಗಿಸಿ ಕೊಂದರು. ಹಾಗೇನೂ ನಾನು ಮಾಡಿಲ್ಲ. ಎಲ್ಲರೂ ಮೂಸಾರ ಕುರಿತು, ಅವರು ಈಗ ಮರಣ ಹೊಂದಿರುವ ಮನುಷ್ಯನೆಂದು ಒಪ್ಪುತ್ತಾರೆ." (Gospel of Barnabas Cofession of Jesus 94) ತರುವಾಯ ಅವರು ಜೋಷ್ವಾ, ಎಲಿಜಾ ಮುಂತಾದವರು ಮಾಡಿದ್ದ ಅದ್ಭುತ ಕಾರ್ಯಗಳ ಬಗ್ಗೆ ವಿವರಿಸಿ "ನಾನು ಹಾಗೇನೂ ಮಾಡಿಲ್ಲ, ಅದ್ಭುತವೆಸಗಿದವರೆಲ್ಲರನ್ನೂ ನೀವು ಮನುಷ್ಯರೆಂದು ಪರಿಗಣಿಸುತ್ತೀರಿ. ಹೀಗಿರುತ್ತಾ ನೀವು ನನ್ನನ್ನೇಕೆ ದೇವಪುತ್ರನೆಂದು

ಭಾವಿಸುತ್ತೀರಿ" ಎಂದು ಪ್ರಶ್ನಿಸಿದರೆಂದು ಬರ್ನಾಬಾಸ್‌ರ ಸುವಾರ್ತೆಗಳಲ್ಲಿ ಹೇಳಿದೆ. ಈ ಬಗ್ಗೆ ಆ ಸುವಾರ್ತೆಯಲ್ಲಿ ಯೇಸು ಹೇಳಿದ ಇನ್ನೂ ಅನೇಕ ಮಾತುಗಳಿವೆ. ಈ ಕಿರುಹೊತ್ತಗೆಯಲ್ಲಿ ಅದಕ್ಕೆ ಅವಕಾಶವಿಲ್ಲ. ಇಂತಹ ಸುವಾರ್ತೆಗಳು ಪರ್ಶಿಯನ್ ಧರ್ಮಗ್ರಂಥಗಳಲ್ಲಿಯೂ ಇವೆ.

ವೇದಗಳಲ್ಲಿರುವ ಪ್ರವಚನಗಳ ಆಧಾರದಲ್ಲಿ ಅನೇಕ ಮುಸ್ಲಿಮೇತರ ವಿದ್ವಾಂಸರು ಪ್ರವಾದಿ ಮುಹಮ್ಮದ್‌ರನ್ನು(ಸ) ಅಂಗೀಕರಿಸಿದ್ದಾರೆ. ಯಹೂದಿ ವಿದ್ವಾಂಸ ಅಬ್ದುಲ್ಲಾ ಬಿನ್ ಸಲಾಮ್ ಅಂಥವರಲ್ಲೊರ್ವರು. ಅವರು ಒಮ್ಮೆ ಈ ರೀತಿ ಹೇಳಿದರು:

"ನನಗೆ ನನ್ನ ಪುತ್ರನ ಬಗ್ಗೆ ತಿಳಿದಿರುವುದಕ್ಕಿಂತ ಹೆಚ್ಚು ಪ್ರವಾದಿವರ್ಯರ(ಸ) ಸತ್ಯ ಸಾಕ್ಷ್ಯದ ಬಗ್ಗೆ ತಿಳಿದಿದೆ."

"ಅದು ಹೇಗೆ" ಉಮರ್(ರ) ಪ್ರಶ್ನಿಸಿದರು.

"ನನ್ನ ಮಗನ ಕುರಿತು ಪ್ರಾಯಶಃ ಆತನ ತಾಯಿಯು ವಂಚಿಸಿದಳೆಂದು ಭಾವಿಸಬಹುದು" ಎಂದು ಅವರು ಉತ್ತರಿಸಿದರು. ಕುರ್‌ಆನ್ ಹೇಳುತ್ತದೆ:

**"ನಾವು ಗ್ರಂಥ ಕೊಟ್ಟಿರುವವರು ಈ ಸ್ಥಾನವನ್ನು (ಈಗ ಕಿಬ್ಲಾ ಮಾಡಲ್ಪಟ್ಟ ಸ್ಥಾನವನ್ನು) ತಮ್ಮ ಮಕ್ಕಳನ್ನು ಗುರುತಿಸುವಂತೆಯೇ ಗುರುತಿಸುತ್ತಾರೆ. ಆದರೆ ಅವರಲ್ಲೊಂದು ಪಂಗಡವು ತಿಳಿದೂ ತಿಳಿದೂ ಸತ್ಯವನ್ನು ಮರೆಮಾಚುತ್ತಿದೆ."**

**(ಪವಿತ್ರ ಕುರ್‌ಆನ್: 2: 146)**